WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಆಗಸ್ಟ್ ೧೬, ೨೦೧೨ (ಶ್ರಾವಣ ೨೫, ಶಕ ವರ್ಷ ೧೯೩೪) | ಸಂಚಿಕೆ ೩೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬೀದರ್ ವಿಮಾನ ನಿಲ್ದಾಣದ ಅಭಿವೃದ್ಧಿ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ. ಮೂಅಇ 20 ರಾಅವಿ 2004, ದಿನಾಂಕ 23.03.2007.
2) ಸರ್ಕಾರಿ ಆದೇಶ ಸಂಖ್ಯೆ. ಮೂಅಇ 20 ರಾಅವಿ 2004, ದಿನಾಂಕ 27.07.2007.
3) ಸರ್ಕಾರಿ ಆದೇಶ ಸಂಖ್ಯೆ. ಮೂಅಇ 20 ರಾಅವಿ 2004, ದಿನಾಂಕ 17.04.2008.
4) ದಿನಾಂಕ 26.05.2008 ರಂದು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಬೀದರ್‌ನಲ್ಲಿ ನಡೆಯಲಿರುವ ಗುರ್–ತಾ–ಗದ್ದಿ 3ನೇ ಶತಮಾನೋತ್ಸವ ಕುರಿತಂತೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಜರುಗಿದ ಸಭೆ.
5) ಸರ್ಕಾರಿ ಆದೇಶ ಸಂಖ್ಯೆ: ಮೂಅಇ 20 ರಾಅವಿ 2004, ದಿನಾಂಕ 17.06.2008.
6) ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ಇವರ ಪತ್ರ ಸಂ: ಡಿಯುಡಿಸಿ/ ಎಸಿಎ/ ಸಿಆರ್–1/ 2011–12/ 520, ದಿನಾಂಕ: 02–12–2011.
7) ಸರ್ಕಾರದ ಪತ್ರ ಸಂ: ಮೂಅಇ 20 ರಾಅವಿ 2004, ದಿನಾಂಕ: 02–03–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ. (1) ರ ಆದೇಶದಲ್ಲಿ ಬೀದರ್‌ನಲ್ಲಿರುವ ರಕ್ಷಣಾ ಇಲಾಖೆಯ ವಿಮಾನ ನಿಲ್ದಾಣವನ್ನು ನಾಗರೀಕ ವಿಮಾನಯಾನಕ್ಕೆ ಉಪಯೋಗಿಸಲು ರಕ್ಷಣಾ ಇಲಾಖೆಯ ತಾತ್ವಿಕ ಒಪ್ಪಿಗೆಯು ದೊರೆತಿದ್ದು, ಇದಕ್ಕೆ ಬೇಕಾಗುವ ಮೂಲಸೌಕರ್ಯ ಒದಗಿಸಲು ಹೆಚ್ಚುವರಿ ಭೂಮಿಯನ್ನು ನೀಡುವಂತೆ ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರವು ಮನವಿಯನ್ನು ಸಲ್ಲಿಸಿದ್ದು, ಅಗತ್ಯ ಭೂಮಿಯ ಸ್ವಾಧೀನಕ್ಕಾಗಿ ರಾಜ್ಯದ ಬೆಂಬಲವನ್ನು ಒದಗಿಸಲು ಮಂಜೂರಾತಿಯನ್ನು ನೀಡಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಬೀದರ್ ವಿಮಾನ ನಿಲ್ದಾಣದಲ್ಲಿ ಸಿವಿಲ್ ಎನ್‌ಕ್ಲೇವ್ ಮೂಲಸೌಲಭ್ಯ ನಿರ್ಮಾಣಕ್ಕಾಗಿ ಅಗತ್ಯವಾದ ಭೂಸ್ವಾಧೀನ ಮತ್ತು ಅಭಿವೃದ್ಧಿ ಕಾರ್ಯಗಳಿಗಾಗಿ ರೂ.2.00 ಕೋಟಿಗಳನ್ನು ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಮತ್ತು ಕಾರ್ಯ ನಿರ್ವಾಹಕಾ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು, ಇವರಿಗೆ ಬಿಡುಗಡೆ ಮಾಡಿದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಬೀದರ್‌ನಲ್ಲಿರುವ ರಕ್ಷಣಾ ಇಲಾಖೆಯ ವಿಮಾನ ನಿಲ್ದಾಣದಲ್ಲಿ ಸಿವಿಲ್ ಎನ್‌ಕ್ಲೇವ್ ಮೂಲಸೌಲಭ್ಯ ನಿರ್ಮಾಣಕ್ಕಾಗಿ ಬೀದರ್ ಜಿಲ್ಲೆ, ಬೀದರ್ ತಾಲ್ಲೂಕಿನ ಚಿದ್ರಿ ಮತ್ತು ಬೆಳ್ಳೂರ ಗ್ರಾಮಗಳಲ್ಲಿ 69.38 ಎಕರೆ ವಿಸ್ತೀರ್ಣದ

ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಅಗತ್ಯವಾದ ಬಾಕಿ ಮೊತ್ತ ರೂ.60,49,000/– ಗಳನ್ನು ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಮತ್ತು ಕಾರ್ಯ ನಿರ್ವಾಹಕಾ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು, ಇವರಿಗೆ ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿರುವ ಸಭೆಯ ನಡವಳಿಯಂತೆ, ಕ್ರಮ ಸಂಖ್ಯೆ (5)ರ ಸರ್ಕಾರಿ ಆದೇಶದಲ್ಲಿ 2008ನೇ ವರ್ಷದಲ್ಲಿ ನಡೆದ "ಗುರ್–ತಾ–ಗದ್ದಿ" 3ನೇ ಶತಮಾನೋತ್ಸವ ಸಮಾರಂಭದ ಆಚರಣೆ ಸಲುವಾಗಿ ಬೀದರ್ ವಿಮಾನ ನಿಲ್ದಾಣವನ್ನು ಆದಷ್ಟು ಜಾಗ್ರತೆಯಾಗಿ ಕಾರ್ಯಗತಗೊಳಿಸಲು ಹಾಗೂ ಬೀದರ್‌ನಲ್ಲಿ ಏರ್‌ಸ್ಟ್ರಿಪ್ ಹಾಗೂ ಟರ್ಮಿನಲ್ ಕಟ್ಟಡವನ್ನು ಅಭಿವೃದ್ಧಿಪಡಿಸಲು ರೂ.3.00 ಕೋಟಿಗಳನ್ನು ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್, ಇವರಿಗೆ ಬಿಡುಗಡೆ ಮಾಡಲಾಗಿದೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಪತ್ರ ದಿನಾಂಕ: 02–12–2011ರಲ್ಲಿ ಜಿಲ್ಲಾಧಿಕಾರಿಗಳು, ಬೀದರ್, ಇವರು ಕಳುಹಿಸಿರುವ ಪ್ರಸ್ತಾವನೆಯಲ್ಲಿ ಬೀದರ್‌ನಲ್ಲಿರುವ ವಾಯು ಸೇನೆಯ ವಿಮಾನ ನಿಲ್ದಾಣದಲ್ಲಿ ಈಗಾಗಲೇ ನಿರ್ಮಿಸಿರುವ ತಾತ್ಕಾಲಿಕ ಏರ್ ಟರ್ಮಿನಲ್ ಕಟ್ಟಡದ ಜಮೀನು ಹಾಗೂ ಹೊಸದಾಗಿ ನಿರ್ಮಿಸಲಿರುವ ಬೀದರ್ ವಿಮಾನ ನಿಲ್ದಾಣದ ಜಮೀನುಗಳು ಬೇರೆ ಬೇರೆಯಾಗಿದ್ದು, ಎರಡೂ ಸ್ಥಳಕ್ಕೂ ಸಂಬಂಧವಿಲ್ಲವಾದ್ದರಿಂದ ಭೂಗುತ್ತಿಗೆ ಆಧಾರದ ಮೇಲೆ ಈಗಾಗಲೇ ಪಡೆದುಕೊಂಡಿರುವ 3.6 ಎಕರೆ ಜಮೀನಿನಲ್ಲಿ ನಿರ್ಮಿಸಿರುವ ತಾತ್ಕಾಲಿಕ ಟರ್ಮಿನಲ್ ಕಟ್ಟಡವನ್ನು ಜಮೀನಿನೊಂದಿಗೆ ಭೂಸ್ವಾಧೀನಪಡಿಸಿಕೊಳ್ಳಲು ಅನುಮೋದನೆ ಕೋರಿ ಹಾಗೂ ಇದಕ್ಕೆ ತಗಲುವ ವೆಚ್ಚ ರೂ.53,55,366.81ಗಳನ್ನು ಈ ಹಿಂದೆ ಬೀದರ್ ತಾಲ್ಲೂಕಿನ ಬೇಳ್ಳೂರ ಹಾಗೂ ಚಿದ್ರಿ ಗ್ರಾಮಗಳಲ್ಲಿ ಗುರುತಿಸಿದ 66.36 ಎಕರೆ ಜಮೀನಿನ ಭೂಸ್ವಾಧೀನಕ್ಕಾಗಿ ಈಗಾಗಲೇ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು, ಇವರಿಗೆ ಬಿಡುಗಡೆಯಾಗಿರುವ ರೂ.2.6049 ಕೋಟಿಗಳಿಂದ ಬಿಡುಗಡೆ ಮಾಡುವಂತೆಯೂ ಹಾಗೂ ಈ ಭೂಸ್ವಾಧೀನ ಪ್ರಕ್ರಿಯೆಯನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

6. ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸರ್ಕಾರದ ಪತ್ರದಲ್ಲಿ ಬೀದರ್ ಜಿಲ್ಲೆಯ ಚಿದ್ರಿ ಗ್ರಾಮದ ಸರ್ವೆ ನಂ. 250/ 3ರಲ್ಲಿ 3 ಎಕರೆ 6 ಗುಂಟೆ ಜಮೀನಿನಲ್ಲಿ ನಿರ್ಮಾಣವಾಗಿರುವ ತಾತ್ಕಾಲಿಕ ಏರ್ ಟರ್ಮಿನಲ್ ಕಟ್ಟಡವನ್ನು ಜಮೀನಿನೊಂದಿಗೆ ರೂ.53,55,366.81 (ಐವತ್ಮೂರು ಲಕ್ಷ ಐವತ್ತೈದು ಸಾವಿರದ ಮುನ್ನೂರ ಅರವತ್ತಾರು ರೂಪಾಯಿ ಎಂಬತ್ತೊಂದು ಪೈಸೆ)ಗಳ ವೆಚ್ಚದಲ್ಲಿ ಭೂಸ್ವಾಧೀನಪಡಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

7. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ.ಮೂಅಇ 20 ರಾಅವಿ 2004, ಬೆಂಗಳೂರು, ದಿನಾಂಕ: 15–05–2012.**

ಪ್ರಸ್ತಾವನೆಯನ್ನು ಸರ್ಕಾರ ಕುಲಂಕಷವಾಗಿ ಪರಿಶೀಲಿಸಿದ ನಂತರ ಚಿದ್ರಿ ಗ್ರಾಮದ ಸರ್ವೇ ನಂ.250/3ರ ವಿಸ್ತೀರ್ಣ 3 ಎಕರೆ 6 ಗುಂಟೆ ಜಮೀನಿನಲ್ಲಿ ನಿರ್ಮಿಸಲಾಗಿರುವ ತಾತ್ಕಾಲಿಕ ಕಟ್ಟಡದೊಂದಿಗೆ ಈ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ತಗಲುವ ವೆಚ್ಚ ರೂ.53,55,266.81ಗಳನ್ನು ಈಗಾಗಲೇ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು, ಇವರಿಗೆ ಬಿಡುಗಡೆಯಾಗಿರುವ ರೂ.2.6049ಕೋಟಿಗಳಿಂದ ಭರಿಸಿ ಈ ಮೊತ್ತವನ್ನು ಬೀದರ್ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಹಾಗೂ ಮೇಲಿನ ಮೊತ್ತಕ್ಕೆ ಇಲ್ಲಿಯವರೆಗೂ ಲಭ್ಯವಾಗಿರುವ ಬಡ್ಡಿ ಮೊತ್ತದೊಂದಿಗೆ ಉಳಿಕೆ ಮೊತ್ತ ರೂ.206.94 ಲಕ್ಷಗಳನ್ನು ಸರ್ಕಾರದ ಖಜಾನೆಗೆ ಜಮ ಮಾಡಿ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸುವಂತೆ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಮತ್ತು ಕಾರ್ಯ ನಿರ್ವಾಹಕಾ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು, ಇವರಿಗೆ ನಿರ್ದೇಶಿಸಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. FD 409 EXP – 1/ 12, ದಿನಾಂಕ: 25–04–2012ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ಪಿ.ಆರ್, 1402**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ಕಂದಾಯ ಭವನದಲ್ಲಿ ಸ್ಥಳಾವಕಾಶದ ಹಂಚಿಕೆ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005 (ಭಾಗ), ದಿನಾಂಕ: 17/02/2012

(2) ಪತ್ರ ಸಂಖ್ಯೆ: ಎಡಿಎಂ/01/ಸಿಆರ್/122/2011–12, ದಿನಾಂಕ: 27/03/2012

(3) ಅ.ಸ.ಪತ್ರ ಸಂಖ್ಯೆ: ಆಇ 1477/ಅಖಇ 2012, ದಿನಾಂಕ: 26/03/2012.

**ಪ್ರಸ್ತಾವನೆ:**

ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿ ನಿರ್ಮಾಣ ಮಾಡಿರುವ ಕಂದಾಯ ಭವನ ಕಟ್ಟಡದಲ್ಲಿ ಕಂದಾಯ ಸಚಿವಾಲಯದ ಆಡಳಿತ ವ್ಯಾಪ್ತಿಯ ಕೆಲವೊಂದು ಇಲಾಖಾ ಕಛೇರಿಗಳು ಮತ್ತು ಸಂಸ್ಥೆಗಳಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸ್ಥಳಾವಕಾಶವನ್ನು ಹಂಚಿಕೆ ಮಾಡಲಾಗಿತ್ತು.

ಬೆಂಗಳೂರು ಜಿಲ್ಲಾಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಕಂದಾಯ ಭವನದ ಐದನೇ ಮಹಡಿಯಲ್ಲಿ ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರ ಕಛೇರಿಗೆ ಹಂಚಿಕೆಯಾಗಿರುವ ಜಾಗವನ್ನು ಬೆಂಗಳೂರು ಜಿಲ್ಲಾ ಖಜಾನೆ ಕಛೇರಿಗೆ ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ/ಬೆಂಗಳೂರು ದಕ್ಷಿಣ ತಾಲ್ಲೂಕು ಕಛೇರಿಗಳ ಅಭಿಲೇಖಾಲಯಗಳಿಗೆ ಹಂಚಿಕೆ ಮಾಡುವಂತೆ ಕೋರಿದ್ದಾರೆ.

ಆರ್ಥಿಕ ಇಲಾಖೆಯು ಮೇಲೆ (3)ರಲ್ಲಿ ಓದಲಾದ ತನ್ನ ಅರೆ ಸರ್ಕಾರಿ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲಾ ಖಜಾನೆಗೆ ಕಂದಾಯ ಭವನ ಕಟ್ಟಡದಲ್ಲಿ 8000 ಚದರ ಅಡಿ ಜಾಗವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕಂದಾಯ ಭವನದ ಕಟ್ಟಡದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿ ಕಛೇರಿಗೆ ಮತ್ತು ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರ ಕಛೇರಿಗೆ ಹಂಚಿಕೆಯಾಗಿರುವ ಸ್ಥಳಾವಕಾಶವನ್ನು ಬೇರೆ ಕಛೇರಿಗಳಿಗೆ ಮರು ಹಂಚಿಕೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005 (ಭಾ), ಬೆಂಗಳೂರು, ದಿನಾಂಕ: 08/05/2012**

ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005 (ಭಾ) ದಿನಾಂಕ: 17/02/2012 ಅನ್ನು ಮಾರ್ಪಡಿಸಿ, ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ಕಂದಾಯ ಭವನ ಕಟ್ಟಡ ಮತ್ತು ಬೆಂಗಳೂರು ಜಿಲ್ಲಾಧಿಕಾರಿ ಕಛೇರಿ ಅನೆಕ್ಸ್ ಕಟ್ಟಡದ ಸ್ಥಳಾವಕಾಶವನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿವಿಧ ಇಲಾಖಾ ಕಛೇರಿಗಳು/ಸಂಸ್ಥೆಗಳಿಗೆ ಈ ಕೆಳಗಿನಂತೆ ಮರು ಹಂಚಿಕೆ ಮಾಡಲಾಗಿದೆ.

| ಮಹಡಿ | | ಇಲಾಖಾ ಕಛೇರಿ/ಸಂಸ್ಥೆ | ವಿಸ್ತೀರ್ಣ (ಚದರ ಅಡಿಗಳಲ್ಲಿ) |
|---|---|---|---|
| ನೆಲಮಹಡಿ | 1 | ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು | 11223.28 |
| | 2 | ತಾಲ್ಲೂಕು ಕಛೇರಿ, ಬೆಂಗಳೂರು ದಕ್ಷಿಣ ತಾಲ್ಲೂಕು | 11223.29 |
| 1ನೇ ಮಹಡಿ | 1<br>2 | ಉಪ ವಿಭಾಗೀಯ ಕಛೇರಿ, ಬೆಂಗಳೂರು ಉತ್ತರ<br>ಉಪ ವಿಭಾಗೀಯ ಕಛೇರಿ, ಬೆಂಗಳೂರು ದಕ್ಷಿಣ ಮತ್ತು ತಹಸೀಲ್ದಾರರ ಕಛೇರಿಗಳು | 16830.07 |
| 2ನೇ ಮಹಡಿ | 1 | ಬೆಂಗಳೂರು ಜಿಲ್ಲಾ ನೋಂದಣಾಧಿಕಾರಿ ಹಾಗೂ ಉಪ ನೋಂದಣಾಧಿಕಾರಿಗಳ ಕಛೇರಿಗಳು | 16675.84 |
| 3ನೇ ಮಹಡಿ | 1<br>2<br>3 | ಕಾನ್ಫರೆನ್ಸ್ ಹಾಲ್<br>ಅಭಿಲೇಖಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು ಕಛೇರಿ<br>ಭೂಮಿ ಕೇಂದ್ರ ಕಂದಾಯ ಇಲಾಖೆ | 10090.08 (ಎಡ)<br>5090.08 (ಬಲ)<br>5000.00 |
| 4ನೇ ಮಹಡಿ | 1 | ಧಾರ್ಮಿಕ ದತ್ತಿ ಇಲಾಖೆ | 10122.98 (ಎಡ) |
| | 2 | 2 ಜಿಲ್ಲಾ ನೋಂದಣಾಧಿಕಾರಿ ಕಛೇರಿಗಳು ಹಾಗೂ<br>2 ಉಪ ನೊಂದಣಿ ಕಛೇರಿಗಳು. | 10096.73 (ಬಲ) |
| ಐದನೇ ಮಹಡಿ | 1 | ಜಿಲ್ಲಾ ಖಜಾನೆ, ಬೆಂಗಳೂರು ನಗರ ಜಿಲ್ಲೆ | 8000.00 |
| | 2 | ಅಭಿಲೇಖಾಲಯ, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ | 5586.44 |
| | 3 | ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯ | 7155.00 |
| ಆರನೇ ಮಹಡಿ | 1 | ಕೇಂದ್ರೀಯ ಆಡಳಿತ ನ್ಯಾಯ ಮಂಡಳಿ | 10408.45 (ಎಡ) |
| | 2 | ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಮತ್ತು ಅಡ್ವೋಕೇಟ್ ಜನರಲ್ ಕಛೇರಿ | 10408.45 (ಬಲ) |

| ಮಹಡಿ | | ಇಲಾಖಾ ಕಛೇರಿ/ಸಂಸ್ಥೆ | ವಿಸ್ತೀರ್ಣ (ಚದರ ಅಡಿಗಳಲ್ಲಿ) |
|---|---|---|---|
| ಏಳನೇ ಮಹಡಿ | 1 | ಕರ್ನಾಟಕ ಆಡಳಿತ ನ್ಯಾಯ ಮಂಡಳಿ, | 25581.44 |
| ಎಂಟನೇ ಮಹಡಿ | 1 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಕರ್ನಾಟಕ | 25581.44 |

**ಜಿಲ್ಲಾಧಿಕಾರಿಗಳ ಕಛೇರಿ ಅನೆಕ್ಸ್ ಕಟ್ಟಡ**

| | | | |
|---|---|---|---|
| ನೆಲ ಮಹಡಿ | 4076.56 | ಕಂದಾಯ ಇಲಾಖಾ ನೌಕರರ ಸಂಘ | 12229.68 ಚ.ಅ |
| ಒಂದನೇ ಮಹಡಿ | 4076.56 | | |
| ಎರಡನೇ ಮಹಡಿ | 4076.56 | | |
| ಮೂರನೇ ಮಹಡಿ | 4378.23 | 2– ಜಿಲ್ಲಾ ನೋಂದಣಿ ಕಛೇರಿಗಳು | 9058.14 ಚ.ಅ |
| ನಾಲ್ಕನೇ ಮಹಡಿ | 4679.90 | 2– ಉಪ ನೋಂದಣಿ ಕಛೇರಿಗಳು | |

ಕಂದಾಯ ಸಚಿವಾಲಯದ ವ್ಯಾಪ್ತಿಗೆ ಬಾರದ ಸರ್ಕಾರಿ ಕಛೇರಿಗಳು/ಸಂಸ್ಥೆಗಳು ಲೋಕೋಪಯೋಗಿ ಇಲಾಖೆ ಕಾಲಕಾಲಕ್ಕೆ ನಿಗದಿಪಡಿಸುವ ಬಾಡಿಗೆ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

**ಪಿ.ಆರ್. 1418**

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ಶ್ರೀ ಜಿ.ಚನ್ನಬಸಪ್ಪ, ನಿವೃತ್ತ ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು – ಇವರ ಮೇಲಿನ ಸಾಬೀತಾಗಿರುವ ಆರೋಪಕ್ಕೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** (1) ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು – ಇವರ ಪತ್ರ ಸಂಖ್ಯೆ: ಭಾನಿ/78/ಆಡಳಿತ/2006, ದಿನಾಂಕ: 20.11.2006.

(2) ನೋಟೀಸ್ ಸಂಖ್ಯೆ: ಸಂವ್ಯಶಾಇ 46 ಭಾನಿವಿ 2006, ದಿ: 11.11.2008.

(3) ಶ್ರೀ ಜಿ.ಚನ್ನಬಸಪ್ಪ – ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 24.11.2008.

(4) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 46 ಭಾನಿವಿ 2006, ದಿ: 27.12.2008.

(5) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 20.08.2011.

(6) ಆಪಾದಿತರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಂವ್ಯಶಾಇ 46 ಭಾನಿವಿ 2006, ದಿನಾಂಕ: 13.09.2011.

(7) ಆಪಾದಿತರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 24.09.2011.

**ಪ್ರಸ್ತಾವನೆ:**

ಶ್ರೀ ಜಿ.ಚನ್ನಬಸಪ್ಪ, ನಿವೃತ್ತ ಸಂಶೋಧನಾಧಿಕಾರಿ ಇವರು ಈ ಹಿಂದೆ ಭಾಷಾಂತರ ನಿರ್ದೇಶನಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ನೇಮಕಾತಿಗಾಗಿ ಅರ್ಜಿ ಮತ್ತು ದಾಖಲೆಗಳಲ್ಲಿ ತಮ್ಮ ಜನ್ಮ ದಿನಾಂಕವನ್ನು ತಪ್ಪಾಗಿ ನೀಡಿರುವುದರ ಬಗ್ಗೆ ಖಚಿತ ಪಡಿಸಿ, ಸದರಿಯವರ ಜನ್ಮ ದಿನಾಂಕ: 13.08.1950ನ್ನು 13.08.1954 ಎಂದು ತಿದ್ದಿ ಸರ್ಕಾರಕ್ಕೆ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆದಿದ್ದಾರೆಂದು ತಿಳಿಸಿ, ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯರವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಮೂಲ ದಾಖಲೆಗಳ ಸಮೇತ ಪ್ರಾಥಮಿಕ ವರದಿ ಸಲ್ಲಿಸಿರುತ್ತಾರೆ.

ಶ್ರೀ ಜಿ.ಚನ್ನಬಸಪ್ಪ, ಭಾಷಾಂತರಕಾರರ ಹುದ್ದೆಯ ಆಯ್ಕೆ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿರುವ ಸಂದರ್ಭದಲ್ಲಿ ಜನ್ಮ ದಿನಾಂಕವನ್ನು ತಿದ್ದಿ ಸುಳ್ಳು ಜನ್ಮ ದಿನಾಂಕ ನೀಡಿರುವ ಆರೋಪಕ್ಕಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 11.11.2008ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ, ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರಾದ ಶ್ರೀ ಜಿ.ಚನ್ನಬಸಪ್ಪ ಇವರು ದಿನಾಂಕ: 24.11.2008ರಂದು ನೋಟೀಸಿಗೆ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿರುತ್ತಾರೆ. ಇವರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಸಮಂಜಸ ಕಾರಣಗಳು ಇಲ್ಲದೇ ಇರುವುದರಿಂದ ಅವರ ಹೇಳಿಕೆಯನ್ನು ಸರ್ಕಾರವು ತಳ್ಳಿ ಹಾಕಿ ವಿಚಾರಣೆ ನಡೆಸಲು ಮೇಲೆ (4)ರಲ್ಲಿ ಓದಲಾದ ದಿನಾಂಕ: 27.12.2008ರ ಸರ್ಕಾರದ ಆದೇಶದಲ್ಲಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಎನ್. ಸುಬ್ಬರಾವ್ ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಶಾಖಾಧಿಕಾರಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಶ್ರೀ ಹೆಚ್.ರಾಜ್‌ಕುಮಾರ್ – ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರವಾದ ಸರ್ಕಾರಕ್ಕೆ ಮೇಲೆ (5) ರಲ್ಲಿ ಓದಲಾದ ವಿಚಾರಣಾ ವರದಿ ದಿನಾಂಕ: 20.08.2011ರಂದು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿನ ನಿರ್ಣಯದಂತೆ ಆಪಾದಿತರ ಮೇಲಿನ ಆರೋಪವು ಸಾಬೀತಾಗಿದ್ದರಿಂದ ಮೇಲೆ (6)ರಲ್ಲಿ ಓದಲಾದ ದಿನಾಂಕ: 13.09.2011ರಂದು ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಲಾಗಿತ್ತು. ಆಪಾದಿತರು ವಿಚಾರಣಾ ವರದಿಯಲ್ಲಿನ ನಿರ್ಣಯದ ವಿರುದ್ಧ ರಕ್ಷಣಾ ಹೇಳಿಕೆಯನ್ನು ದಿನಾಂಕ: 24.09.2011ರಂದು ಸಲ್ಲಿಸಿ, ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಅಲ್ಲಗಳೆಯದೆ ತಮ್ಮಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲವೆಂದು ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ವಿಚಾರಣಾ ವರದಿಯಲ್ಲಿನ ನಿರ್ಣಯ ಆಪಾದಿತರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ್ದ, ರಕ್ಷಣಾ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಿದಾಗ ನಿವೃತ್ತ ಆಪಾದಿತರಾದ ಶ್ರೀ ಜಿ. ಚನ್ನಬಸಪ್ಪ ಇವರು ಜನ್ಮ ದಿನಾಂಕವನ್ನು ತಿದ್ದಿರುವ ಆರೋಪ ಸಾಬೀತಾಗಿರುವುದರಿಂದ ಹಾಗೂ ಸದರಿಯವರು ಸೇವೆಯಲ್ಲಿದ್ದಾಗ ಗಂಭೀರ ಸ್ವರೂಪದ, ದುರ್ನಡತೆ ಎಸಗಿರುವುದು ಸಾಬೀತಾಗಿರುವುದರಿಂದ ಕರ್ನಾಟಕ ಸಿವಿಲ್ ಸೇವಾ ನಿಯಮಗಳ ನಿಯಮ 213 ರಡಿಯಲ್ಲಿ ಅವರ ನಿವೃತ್ತಿ ವೇತನದಿಂದ ಶೇಕಡಾ 10ರಷ್ಟನ್ನು ಎರಡು ವರ್ಷಗಳ ಕಾಲ ಅವಧಿಗೆ ತಡೆ ಹಿಡಿಯುವ ದಂಡನೆಯನ್ನು ವಿಧಿಸುವ ಬಗ್ಗೆ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 46 ಭಾನಿವಿ 2006, ದಿನಾಂಕ: 16.05.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ ನಿಯಮಗಳ ನಿಯಮ 213ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಜಿ.ಚನ್ನಬಸಪ್ಪ, ನಿವೃತ್ತ ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು – ಇವರ ನಿವೃತ್ತಿ ವೇತನದಲ್ಲಿ ಶೇ. 10ರಷ್ಟನ್ನು ಎರಡು ವರ್ಷಗಳ ಅವಧಿಗೆ ಕಡಿತಗೊಳಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಶ್ರೀಧರ್**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಪಿ.ಆರ್. 1453**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಎಲ್ ಸತೀಶ್ ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರ ವೇತನವನ್ನು ಕಿರಿಯ ಅಧಿಕಾರಿಯ ವೇತನಕ್ಕೆ ಎತ್ತರಿಸುವ ಬಗ್ಗೆ

**ಉಲ್ಲೇಖ :** 1) ದಿನಾಂಕ 10-04-1987 ರ ಆದೇಶ ಸಂಖ್ಯೆ AHFF 7 FNG 87

2) ದಿನಾಂಕ 11-01-2007 ರ ಆದೇಶ ಸಂಖ್ಯೆ FD 32 SRP 2006

3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 403 ಸೇ-2/2009, ದಿನಾಂಕ 24-01-2011

4) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ ಬಿ1 / ವೇತನ / ವಿವ-157/2007-08, ದಿನಾಂಕ 21-02-2012

**ಪ್ರ ಸ್ತಾ ವ ನೆ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಅರಣ್ಯ ಇಲಾಖೆಯಲ್ಲಿ ಅಸ್ತಿತ್ವದಲ್ಲಿದ್ದ ವಲಯ ಅರಣ್ಯ ಅಧಿಕಾರಿ ಗ್ರೇಡ್-I ಮತ್ತು ಗ್ರೇಡ್-II ವೃಂದಗಳನ್ನು ವಿಲೀನಗೊಳಿಸಿ ರೂ. 920-1735 ಗಳ ವೇತನ ಶ್ರೇಣಿಯಲ್ಲಿ ವಲಯ ಅರಣ್ಯ ಅಧಿಕಾರಿಗಳೆಂದು ಪದನಾಮೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ 1987 ರ ಪರಿಷ್ಕೃತ ವೇತನ ಶ್ರೇಣಿಯಿಂದಾಗಿ, ಕಡ್ಡಾಯ ಕನ್ನಡ ಭಾಷಾ ಮತ್ತು ನಿಗಧಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣ ಹೊಂದಿದ ಪ್ರಯುಕ್ತ ಕಿರಿಯ ಸರ್ಕಾರಿ ನೌಕರರಿಗೆ ಮಂಜೂರಾದ ಹೆಚ್ಚುವರಿ ವೇತನ ಮುಂಬಡ್ತಿಯಿಂದಾಗಿ ಹಿರಿಯ ಸರ್ಕಾರಿ ನೌಕರರ ವೇತನದಲ್ಲಿ ಉಂಟಾಗಿರುವ ತಾರತಮ್ಯವನ್ನು ನಿವಾರಿಸಲು ಅವಕಾಶ ಕಲ್ಪಿಸಲಾಗಿದ್ದು, ಕೆಲವೊಂದು ಷರತ್ತುಗಳು ಪೂರ್ಣಗೊಂಡಿದ್ದಲ್ಲಿ, ಕಿರಿಯ ಸರ್ಕಾರಿ ನೌಕರರ ವೇತನಕ್ಕೆ ಸರಿಸಮಾನವಾಗಿ ಹಿರಿಯ ಸರ್ಕಾರಿ ನೌಕರರ ವೇತನವನ್ನು ಎತ್ತರಿಸಬಹುದಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ದಿನಾಂಕ 11-01-2007 ರ ಆದೇಶ ಸಂಖ್ಯೆ FD 32 SRP 2006 ರಲ್ಲಿ ವಿಧಿಸಿರುವ ಷರತ್ತುಗಳ ಪೈಕಿ ಎರಡನೇ ಷರತ್ತಿಗೆ ವಿನಾಯ್ತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ, ಶ್ರೀ ಎ ಶ್ರೀಧರ ನಾಯ್ಕ, ವಲಯ ಅರಣ್ಯ ಅಧಿಕಾರಿ ಮತ್ತು ಶ್ರೀ ಎಲ್ ಸತೀಶ್ ಕುಮಾರ್, ವಲಯ ಅರಣ್ಯ ಅಧಿಕಾರಿ ಇವರುಗಳ ಮೂಲ ವೇತನವನ್ನು ದಿನಾಂಕ 10-04-1987 ರಂದು ವೇತನ ಶ್ರೇಣಿ ರೂ. 1720-3170 ರಲ್ಲಿ ರೂ. 1720-00 ಕ್ಕೆ ನಿಗಧಿಪಡಿಸಲಾಗಿದೆ. ಇದರಲ್ಲಿ ಸೇವೆಯಲ್ಲಿ ಹಿರಿಯರಾದ ಶ್ರೀ ಸತೀಶ್ ಕುಮಾರ್ ರವರು ಕನ್ನಡ ಭಾಷಾ ಮತ್ತು ನಿಗಧಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣ ಹೊಂದಿದ ಪ್ರಯುಕ್ತ ದಿನಾಂಕ 06-11-1986 ರಂದು ಮಂಜೂರಾದ ಒಂದು ಹೆಚ್ಚುವರಿ ವೇತನ ಮುಂಬಡ್ತಿಯು ಸಹ ಸೇರಿರುತ್ತದೆ. ಅದೇ, ಕನ್ನಡ ಭಾಷಾ ಮತ್ತು ನಿಗಧಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣ ಹೊಂದಿದ ಪ್ರಯುಕ್ತ ಹೆಚ್ಚುವರಿ ವೇತನ ಮುಂಬಡ್ತಿಯ ಮಂಜೂರಾತಿಯಿಂದಾಗಿ ಸೇವೆಯಲ್ಲಿ ಕಿರಿಯರಾದ ಶ್ರೀ ಶ್ರೀಧರ ನಾಯ್ಕ ರವರ ಮೂಲ ವೇತನವನ್ನು ದಿನಾಂಕ 29-07-1987 ರಂದು ರೂ. 1760-00 ಕ್ಕೆ ನಿಗಧಿಪಡಿಸಲಾಗಿದೆ. ಆದರೆ ಇದೇ ದಿನಾಂಕದಂದು ಸೇವೆಯಲ್ಲಿ ಹಿರಿಯರಾದ ಶ್ರೀ ಸತೀಶ್ ಕುಮಾರ್ ರವರ ವೇತನವು ರೂ. 1720-00 ಕ್ಕೆ ನಿಗಧಿಯಾಗುವ ಮೂಲಕ ವೇತನದಲ್ಲಿ ಆಗಿರುವ ತಾರತಮ್ಯವನ್ನು ಸರಿಪಡಿಸುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 072 ಅಪಸೇ 2012, ಬೆಂಗಳೂರು, ದಿನಾಂಕ 15-05-2012**

ಸೇವೆಯಲ್ಲಿ ಹಿರಿಯರಾದ ಶ್ರೀ ಎಲ್ ಸತೀಶ್ ಕುಮಾರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಹಿಂದಿನ ವಲಯ ಅರಣ್ಯ ಅಧಿಕಾರಿ) ಇವರು ದಿನಾಂಕ 11-01-2007 ರ ಆದೇಶ ಸಂಖ್ಯೆ FD 32 SRP 2006 ರಲ್ಲಿ ವಿಧಿಸಿರುವ ಒಂದನೇ ಮತ್ತು ಮೂರನೇ ಷರತ್ತುಗಳನ್ನು ಪೂರೈಸಿರುವುದರಿಂದ ಮತ್ತು ಎರಡನೇ ಷರತ್ತಿಗೆ ವಿನಾಯ್ತಿ ಇರುವುದರಿಂದ, ಇವರ ವೇತನವನ್ನು ಅನುಬಂಧದಲ್ಲಿ ನಮೂದಿಸಿರುವಂತೆ ದಿನಾಂಕ 01-04-1988 ಕ್ಕೆ ರೂ. 1720-3170 ರ ವೇತನ ಶ್ರೇಣಿಯಲ್ಲಿ ರೂ. 1760-00 ರಿಂದ 1800-00 ಕ್ಕೆ ಎತ್ತರಿಸಿ, ಸೇವೆಯಲ್ಲಿ ಕಿರಿಯರಾದ ಶ್ರೀ ಶ್ರೀಧರ ನಾಯ್ಕ, ವಲಯ ಅರಣ್ಯ ಅಧಿಕಾರಿ ಇವರ ವೇತನಕ್ಕೆ ಸರಿಸಮಾನವಾಗಿ ನಿಗಧಿಪಡಿಸಲಾಗಿದೆ.

ದಿನಾಂಕ 11-01-2007 ರ ಆದೇಶ ಸಂಖ್ಯೆ ಎಫ್‌ಡಿ 032 ಎಸ್‌ಆರ್‌ಪಿ 2006 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು / ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್ ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## PROFORMA

**G.O.No. FEE 72 FEG 2012**

The pay of **Sri L Sathish Kumarf, Assistant Conservator of Forests,** working in the office of the **Bijapur Sub Division, Bijapur** is stepped up to that of his/her Junior Sri A. Sridhar Naik, Assistant Conservator of Forests, working in the office of Social Forestry Mangalore, with effect from **01.04.1988.**

The next increment of **Sri L. Sathish Kumar, Assistant Conservator of Forests,** will accrue on **01.04.1989.**

The details of the pay drawn by the Senior Government servant and the junior Government servant are given below:-

| | | **Senior Government Servant** | | **Junior Government Servant** | |
|---|---|---|---|---|---|
| 1 | Name & Designation with pay scale | Sri L Sathish Kumar, Range Forest Officer | | A. Sridhar Naik<br>Range Forest Officer | |
| | | as on 10.04.87 - (1720 - 3170) | | as on 10.04.87 - (1720 - 3170) | |
| 2 | Date of regular appointment to Government Service | 06.03.1985 | | 07.01.1987 | |
| 3 | The post held on 1st July 1986 and the pay scale | Range Forest Officer (1280 - 2450) | | He was not appointed on 1.7.1986 | |
| 4 | Sl. No. in the final gradation list | 879 | | 948 | |
| 5 | The pay drawn from time to time from 1st January 1982 | **Period** | **Scale** | **Period** | **Scale** |
| | | 06.03.1985 | 675 (675-1320) | He was not in service on 01.01.1982. | |
| | | 01.03.1986 | 700 | | |
| | | 01.07.1986 | 1310 (1280-2450) | | |
| | | 06.11.1986 | 1370 (Addl. Increment) | 07.01.87 | 1280 (1280 - 2450) |
| | | | | 10.04.87 | 1720 (1720–3170) |
| | | 10.04.1987 | 1720(1720-3170) | 29.07.87 | 1760 (Addl. Inc.) |
| | | 01.04.1988 | 1760 | 01.04.88 | 1800 |
| 6 | The date on which additional increment was sanctioned | 16.11.1986 | | 29.07.1987 | |
| 7 | Date from which stepping up of pay of the Senior Government servant is admissible | 01.04.1988 | | 01.04.1988 | |

**S. Balakrishnaiah**

**P.R. 1454**

Under Secretary to Government, (Services)

Forest, Ecology & Environment Department

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯಃ** - 2012-13ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಆಡಳಿತ ನಿರ್ವಹಣೆ ಮತ್ತು ಕೇಂದ್ರದ ಕಾರ್ಯಚಟುವಟಿಕೆಗಳ ಅನುಷ್ಠಾನಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆಃ**

1) ಸರ್ಕಾರಿ ಆದೇಶ ಸಂಖ್ಯೆಃ ವಿಯಇ 58 ವಿತ್ರಮ 2012, ದಿನಾಂಕಃ 05.04.2012.

2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಇವರ ಪತ್ರ ಸಂ.KSNDMC/Budget/ 270/ 2012-13. ದಿನಾಂಕಃ17.04.2012.

**ಪ್ರಸ್ತಾವನೆಃ**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2012-13ನೇ ಸಾಲಿನಲ್ಲಿ ಮುಂದುವರಿಸಿ, 2012-13ನೇ ಸಾಲಿನ ಲೆಕ್ಕಶೀರ್ಷಿಕೆ 3455-00-200-0-01(059)(ಯೋ) ಇದರಡಿಯಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರಕ್ಕೆ(ಕ್ಷಾಮ ನಿರ್ವಹಣಾ ಕೇಂದ್ರ) ಸಹಾಯಾನುದಾನವಾಗಿ ಒಟ್ಟು ರೂ.700.00ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ ಕಲ್ಪಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು 2012-13ನೇ ಸಾಲಿನಲ್ಲಿ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಯ ಸಲುವಾಗಿ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆಃ ವಿಯಇ 1 ಬಉಕೋ 2012, ಬೆಂಗಳೂರು, ದಿನಾಂಕಃ 21.04.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2012-13ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಆಡಳಿತ ನಿರ್ವಹಣೆ ಮತ್ತು ಕೇಂದ್ರದ ಕಾರ್ಯಚಟುವಟಿಕೆಗಳ ಅನುಷ್ಠಾನಕ್ಕಾಗಿ ಮೊದಲನೇ ಕಂತಿನ ಅನುದಾನವಾಗಿ **ಲೆಕ್ಕಶೀರ್ಷಿಕೆ 3455-00-200-0-01(059)(ಯೋ) ಇದರಡಿಯಲ್ಲಿ** ರೂ.100.00ಲಕ್ಷಗಳನ್ನು (ರೂಪಾಯಿ ನೂರು ಲಕ್ಷಗಳು ಮಾತ್ರ) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರು ಮಾಡಿದೆ.

1) **ಈ ಮೊತ್ತವನ್ನು 2012-13ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3455-00-200-0-01 (059) (ಯೋ) ಇದರಡಿಯಲ್ಲಿ ಭರಿಸತಕ್ಕದು,**

2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಅಥವಾ ಪೀಠಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3) ಈಗ ಬಿಡುಗಡೆ ಮಾಡಿದ ಹಣವನ್ನು ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು ಮತ್ತು ಸಂಪೂರ್ಣವಾಗಿ ಉಪಯೋಗ ಮಾಡಿದ ಬಗ್ಗೆ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕ ಪತ್ರಗಳನ್ನು ದೃಢೀಕರಣದೊಂದಿಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು.

5) ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಇಲ್ಲವಾದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯೊಂದಿಗೆ ಹಿಂಪಡೆಯಲಾಗುವುದು.

6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:"ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16–05–2008ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿರವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಟಿ.ವಿ.ಸುಜಾತ**

ಪೀಠಾಧಿಕಾರಿ (ವಿ&ತಂ)

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1473

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:–** 2012–13ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಸಿಬ್ಬಂದಿ ವೇತನ, ಆಡಳಿತಾತ್ಮಕ ವೆಚ್ಚ ಮತ್ತು ಇತರೆ ಕಾರ್ಯಯೋಜನೆಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ:ವಿಯಇ 58 ವಿತ್ರಮ 2012, ದಿನಾಂಕ:05–04–2012.

2) ಕಾರ್ಯನಿರ್ವಾಹಕ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು. ಇವರ ಪತ್ರ ಸಂಖ್ಯೆ.3.1/ಗ್ರಾಂಟ್ಸ್/ಜಿಓಕೆ/84, ದಿ:19/04/2012.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರಿಸಿ, 2012–13ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–01(101) (ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ.1500.00ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯನಿರ್ವಾಹಕ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು. ಇವರು ಮಂಡಳಿಯ ಸಿಬ್ಬಂದಿ ವೇತನ, ಆಡಳಿತಾತ್ಮಕ ವೆಚ್ಚಗಳು ಮತ್ತು ಇತರೆ ಕಾರ್ಯಯೋಜನೆಗಳಿಗೆ ಪ್ರಥಮ ಕಂತಾಗಿ ರೂ.54.50ಲಕ್ಷಗಳ ಸಹಾಯಾನುದಾನ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 82 ವಿತ್ರಮ 2012 ಬೆಂಗಳೂರು, ದಿನಾಂಕ:05/05/2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ 2012–13ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಸಿಬ್ಬಂದಿ ವೇತನ, ಆಡಳಿತಾತ್ಮಕ ವೆಚ್ಚಗಳು ಮತ್ತು ಇತರೆ ಕಾರ್ಯಯೋಜನೆಗಳಿಗೆ ರೂ.14.00ಲಕ್ಷಗಳನ್ನು (ರೂಪಾಯಿ ಹದಿನಾಲ್ಕು ಲಕ್ಷಗಳು ಮಾತ್ರ) ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು. ಇವರಿಗೆ ಈ ಕೆಳಕಂಡ ನಿಭಂದನೆಗಳಿಗೊಳಪಟ್ಟು ಮಂಜೂರು ಮಾಡಲಾಗಿದೆ.

1) ಈ ಅನುದಾನವನ್ನು 2012–13ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3425–60–200–0–01 (101) (ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರಡಿಯಲ್ಲಿ ಭರಿಸತಕ್ಕದ್ದು.

2) ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಅಥವಾ ಪೀಠಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3) ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡ ತಕ್ಷಣ ಲೆಕ್ಕ ಪರಿಶೋಧಕರಿಂದ ಪರೀಕ್ಷಿಸಲ್ಪಟ್ಟ ಲೆಕ್ಕ ಪತ್ರಗಳ ಉಪಯೋಗತಾ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಕಾರ್ಯಕ್ರಮಗಳಿಗಾಗಿ ಮಾತ್ರ ಉಪಯೋಗಿಸತಕ್ಕದ್ದು. ಹಾಗೂ ಈ ಹಣವನ್ನು ಬೇರೆ ಯೋಜನೆಗೆ/ ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.

5) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದುದು, ಕಂಡುಬಂದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕು ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು.

6) ಉದ್ದೇಶತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕ ಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008, ದಿನಾಂಕ:16/05/2008ರಡಿಯಲ್ಲಿ ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರದನ್ವಯ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಟಿ.ವಿ.ಸುಜಾತ**
ಪೀಠಾಧಿಕಾರಿ (ವಿ&ತಂ)
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪಿ.ಆರ್. 1474**

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸಇ/10/ಸಸಂನೋ/2009 ದಿನಾಂಕ 10/7/2009.
2. ಸರ್ಕಾರದ ಆದೇಶ ಸಂಖ್ಯೆ:ಸಇ/10/ಸಸಂನೋ/2009 ದಿನಾಂಕ 16/1/2010.
3. ಸರ್ಕಾರದ ಆದೇಶ ಸಂಖ್ಯೆ:ಸಇ/10/ಸಸಂನೋ/2009 ದಿನಾಂಕ 15/7/2010.
4. ಸರ್ಕಾರದ ಆದೇಶ ಸಂಖ್ಯೆ:ಸಇ/10/ಸಸಂನೋ/2009 ದಿನಾಂಕ 7/1/2011.
5. ಸರ್ಕಾರದ ಆದೇಶ ಸಂಖ್ಯೆ:ಸಇ/165/ಸಸಂನೋ/2010 ದಿನಾಂಕ 20/7/2011.
6. ಸರ್ಕಾರದ ಆದೇಶ ಸಂಖ್ಯೆ ಸಇ/165/ಸಸಂನೋ/2010 ದಿನಾಂಕ 27/12/2011
7. ಮುಖ್ಯ ಆಡಳಿತಾಧಿಕಾರಿ ಕರ್ನಾಟಕ ಚಿತ್ರಕಲಾ ಪರಿಷತ್ ಕುಮಾರಕೃಪಾ ರಸ್ತೆ ಬೆಂಗಳೂರು ಇವರ ಪತ್ರ ಸಂಖ್ಯೆ ಚಿಕಪ:7:2012/07 ದಿನಾಂಕ 16/4/2012

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ) ಕುಮಾರ ಕೃಪಾ ರಸ್ತೆ ಬೆಂಗಳೂರು, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ)ರ ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಕೆ.ಶಂಕರಲಿಂಗೇಗೌಡ, ಭಾ.ಆ.ಸೇ, ಸರ್ಕಾರದ ಕಾರ್ಯದರ್ಶಿ ಸಾರಿಗೆ ಇಲಾಖೆ ಬಹುಮಹಡಿಗಳ ಕಟ್ಟಡ ಡಾ॥ಬಿ.ಆರ್.ಅಂಬೇಡ್ಕರ್ ವಿಧಿ ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ನೇಮಿಸಿ ಆದೇಶಿಸಲಾಗಿರುತ್ತದೆ. ನಂತರ ಆಡಳಿತಾಧಿಕಾರಿಯವರು ಕೋರಿರುವಂತೆ ಮೇಲೆ (2) ರಿಂದ (5)ರವರೆಗೆ ಓದಲಾದ ಆದೇಶಗಳಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ) ಕುಮಾರ ಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಆಡಳಿತಾಧಿಕಾರಿಯ ಅವಧಿಯನ್ನು 6 ತಿಂಗಳ ಅವಧಿಗೆ ಕಾಲಕಾಲಕ್ಕೆ ವಿಸ್ತರಿಸಿ ಆದೇಶಿಸಿಲಾಗಿದೆ.

ಮೇಲೆ (6)ರಲ್ಲಿ ಓದಲಾದ ಆದೇಶದಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ) ಕುಮಾರ ಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಡಳಿತಾಧಿಕಾರಿಯಾಗಿ ನೇಮಕವಾಗಿದ್ದ, ಶ್ರೀ ಎಂ.ಕೆ. ಶಂಕರಲಿಂಗೇಗೌಡ, ಭಾ.ಆ.ಸೇ, ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ.ಬಿ.ಆರ್.ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ಬದಲಾಗಿ ಶ್ರೀ ಜಿ.ವಿ.ಕೊಂಗವಾಡ ಭಾ.ಆ.ಸೇ. ಸರ್ಕಾರದ ಕಾರ್ಯದರ್ಶಿಗಳು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ 9/1/2011 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ (7)ರಲ್ಲಿ ಓದಲಾದ ಮುಖ್ಯ ಆಡಳಿತಾಧಿಕಾರಿಗಳು, ಕರ್ನಾಟಕ ಚಿತ್ರಕಲಾ ಪರಿಷತ್ ಇವರ ಪತ್ರದಲ್ಲಿ ಮುಖ್ಯ ಆಡಳಿತಾಧಿಕಾರಿಯವರು ಶ್ರೀ ಜಿ.ವಿ.ಕೊಂಗವಾಡ ಭಾ.ಆ.ಸೇ, ಸರ್ಕಾರದ ಕಾರ್ಯದರ್ಶಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರು ದಿನಾಂಕ 30/4/2012 ರಂದು ಸರ್ಕಾರೀ ಸೇವೆಯಿಂದ ನಿವೃತ್ತರಾಗಿದ್ದು, ಚಿತ್ರಕಲಾ ಪರಿಷತ್ತಿನ ದೈನಂದಿನ ಕಾರ್ಯಚಟುವಟಿಕೆಗಳಿಗೆ ಹಾಗೂ ಕಾಲೇಜಿನ ಪರೀಕ್ಷೆಗಳು ಮೇ ತಿಂಗಳ ಮೊದಲ ವಾರದವರೆಗೆ ನಡೆಯಲಿರುವುದರಿಂದ ಇವರ ಸ್ಥಾನಕ್ಕೆ ಮತ್ತೋರ್ವ ಅಧಿಕಾರಿಯವರನ್ನು

ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವ ಅಗತ್ಯತೆ ಇರುವುದರಿಂದ, ಚಿತ್ರಕಲಾ ಪರಿಷತ್ತಿನ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯವರನ್ನು ನೇಮಿಸಬೇಕಾಗಿ ಕೋರಿರುತ್ತಾರೆ.

ಶ್ರೀ ಜಿ.ವಿ. ಕೊಂಗವಾಡ ಭಾ.ಆ.ಸೇ, (ನಿವೃತ್ತ) ಇವರನ್ನು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಆಡಳಿತಾಧಿಕಾರಿಯನ್ನಾಗಿ ನೇಮಿಸಿದ ಅವಧಿಯು ಮೇಲೆ (6)ರಲ್ಲಿ ಓದಲಾದ ಆದೇಶದನ್ವಯ ದಿನಾಂಕ 9/1/2012 ರಿಂದ 6 ತಿಂಗಳ ಅವಧಿ ಅಂದರೆ ದಿನಾಂಕ 8/7/2012 ರವರೆಗೆ ಇದ್ದುದರಿಂದ ಹಾಗೂ ಸದರಿ ಅಧಿಕಾರಿಯವರು ದಿನಾಂಕ 30/4/2012 ರಂದು ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಉಳಿದ ಅವಧಿಗೆ ಅಂದರೆ ದಿನಾಂಕ 1/5/2012 ರಿಂದ 8/7/2012 ರವರೆಗೆ ಆಡಳಿತಾಧಿಕಾರಿಯ ನೇಮಕದ ಅಗತ್ಯತೆಯನ್ನು ಮನಗಂಡು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 165 ಸಸಂನೋ 2010 ಬೆಂಗಳೂರು, ದಿನಾಂಕ 21ನೇ ಮೇ, 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ) ಕುಮಾರ ಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎಸ್.ನಾರಾಯಣ ಸ್ವಾಮಿ ಸರ್ಕಾರದ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ದಿನಾಂಕ 1/5/2012 ರಿಂದ 8/7/2012 ರವರೆಗೆ ಆಡಳಿತಾಧಿಕಾರಿಯಾಗಿ ಹೆಚ್ಚುವರಿ ಪ್ರಭಾರದಲ್ಲಿರಿಸಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದಲ್ಲಿನ ನ್ಯೂನತೆಗಳನ್ನು ಸರಿಪಡಿಸಿ, ಸಂಘಕ್ಕೆ ಚುನಾವಣೆಯನ್ನು ನಡೆಸಿ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಹಾಗೂ ಸರ್ಕಾರಕ್ಕೆ ವರದಿ ಮಾಡುವಂತೆ ಸೂಚಿಸಿದೆ. ಮುಂದುವರೆದು ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಸಹಕಾರ ಇಲಾಖೆ.

**ಪಿ.ಆರ್. 1476**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಜಿಲ್ಲಾ ವಿಮಾ ಕಛೇರಿ, ಬೀದರ್, ಇವರುಗಳ ಮೇಲಿನ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**

1. ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೀದರ್, (ತನಿಖಾಧಿಕಾರಿ), ಇವರ ವರದಿ ಸಂಖ್ಯೆ: ಪೊಇ/ಕಲೋ/ಬಿ/ಮಕಾವ/ಗು.ನಂ.4/2010/329, ದಿನಾಂಕ:16.08.2010.
2. ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ನಿರ್ದೇಶಕರ ಪತ್ರ ಸಂ.ವಿನಿ.ಸಿಶಾ. ಲೋಕಾ/1360/2010-11, ದಿನಾಂಕ:04-10-2010.
3. ಅಪರ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಜಿ-39/ಸಿಆರ್- 4/2010/ ಬೀದರ್, ದಿನಾಂಕ:21-03-2012.
4. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ವಾಯ್ಸ್ ರೆಕಾರ್ಡ್‌ನಲ್ಲಿ ದಾಖಲಾದ ಸಂಭಾಷಣೆಯ ವಿವರಗಳು.

ಪ್ರಸ್ತಾವನೆ:

ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಇವರುಗಳು ಜಿಲ್ಲಾ ವಿಮಾಧಿಕಾರಿಗಳ ಕಛೇರಿ, ಬೀದರ್, ಈ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ, ದಿನಾಂಕ:3.8.2010ರಂದು ಫಿರ್ಯಾದಿ ಶ್ರೀ ಎಂ. ಮೋಯಿನಪಾಶಾ ರವರಿಂದ ರೂ.500/- ಲಂಚದ ಹಣ ಸ್ವೀಕಾರ ಆರೋಪಕ್ಕೆ ಸಂಬಂಧಿಸಿದಂತೆ, ಇವರುಗಳ ವಿರುದ್ಧ ಕರ್ನಾಟಕ ಲೋಕಾಯುಕ್ತ, ಬೀದರ್, ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:4/2010 ದಾಖಲಾಗಿದ್ದು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳ ಪ್ರತಿಯನ್ನು ಅಪರ ಪೊಲೀಸ್ ಮಹಾ ನಿರೀಕ್ಷಕರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದ ಮೂಲಕ ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಮುಂದುವರೆದು, ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಇವರುಗಳ ವಿರುದ್ಧ ಭ್ರಷ್ಟಾಚಾರ ನಿರೋಧ ಅಧಿನಿಯಮ, 1988ರ ಕಲಂ 7, 13(1)(ಡಿ) ಸಹವಾಚ 13 (2) ರಡಿ ಮತ್ತು ಐಪಿಸಿ ಕಲಂ 120 (ಬಿ) ರಡಿ ದಾಖಲಾದ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರೋಧ ಅಧಿನಿಯಮ, 1988ರ ಕಲಂ 19(1)(ಬಿ)ರಡಿ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಮೇಲೆ ಕ್ರ.ಸ. (3)ರಲ್ಲಿ ಓದಲಾದ ಪತ್ರದೊಂದಿಗೆ ಕಳುಹಿಸಿಕೊಟ್ಟ ತನಿಖಾ ವರದಿ ಮತ್ತು ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಎಂ. ಮೋಯಿನಪಾಶಾ, ಸರ್ಕಾರಿ ಬಾಲಕರ ಪದವಿಪೂರ್ವ (ಬಾಲಕರ) ಕಾಲೇಜ್, ಬೀದರ್, ಇವರ ಫಿರ್ಯಾದಿ ದಿನಾಂಕ:03.08.2010.
2. ಪ್ರಥಮ ವರ್ತಮಾನ ವರದಿ ಬೀದರ್ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:4/2010, ದಿನಾಂಕ:03.08.2010.
3. ಲೋಕಾಯುಕ್ತ ಕಛೇರಿಯಲ್ಲಿ ಪಂಚನಾಮೆ ದಿನಾಂಕ: 03.08.2010,
4. ಟ್ರ್ಯಾಪ್‌ನ ಪಂಚನಾಮೆ ದಿನಾಂಕ: 03.08.2010,
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: PHI/CME/LOK/73/10-11, ದಿನಾಂಕ: 21.08.2010,
6. ಘಟನೆ ನಡೆದ ಸ್ಥಳದ ನಕಾಶೆ: ಬೀದರ್, ಜಿಲ್ಲಾ ವಿಮಾಧಿಕಾರಿಗಳ ಕಛೇರಿ, ಬೀದರ್, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ.
7. ಕೆಳಕಂಡ ಸಾಕ್ಷಿಗಳ ಹೇಳಿಕೆ, ಮರುಹೇಳಿಕೆಗಳನ್ನು ಪರಿಶೀಲಿಸಲಾಗಿದೆ;
   i. ಶ್ರೀ ಎಂ. ಮೋಯಿನಪಾಶಾ ಬಿನ್ ಜಾನಿಮಿಯ್ಯಾ, ಉಪನ್ಯಾಸಕರು, ಸರ್ಕಾರಿ ಬಾಲಕರ ಪದವಿ ಪೂರ್ವ ಕಾಲೇಜ್, ಬೀದರ್.
   ii. ಶ್ರೀ ಶಂಕರ ಬಿನ್ ಅಮೃತ, ದ್ವಿ.ದ.ಸ. ಜಿಲ್ಲಾ ಸಾರ್ವಜನಿಕ ಆಸ್ಪತ್ರೆ, ಬೀದರ್.
   iii. ಶ್ರೀ ವಿಜಯ್‌ಕುಮಾರ ಬಿನ್ ರಾಮಚಂದ್ರ ಇನಾಮದಾರ್, ಮೆಕ್ಯಾನಿಕ್ ಇನ್ ಆಟೋಮೊಬೈಲ್, ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜ್, ಬೆಂಗಳೂರು.
   iv. ಶ್ರೀಮತಿ ಗಾದಗಿಕರ್ ಕಮಲಾ ಬಿನ್ ಸಿದ್ರಾಮಪ್ಪ, ಅಧೀಕ್ಷಕರು, ಜಿಲ್ಲಾ ವಿಮಾಧಿಕಾರಿ, ಬೀದರ್.
   v. ಶ್ರೀ ಕೆ. ರಂಗಸ್ವಾಮಿ, ಪೌರಾಯುಕ್ತರು, ನಗರ ಸಭೆ, ಬೀದರ್, ಸಾ. ಹಾಸನ ಜಿಲ್ಲೆ.
   vi. ಶ್ರೀ ಪ್ರಕಾಶ್ ಬಿನ್ ಕಾರ್ತಿಕ ಸ್ವಾಮಿ ಮಠಪತಿ, ಸಹಾಯಕ ಅಭಿಯಂತರರು ಲೋಕೋಪಯೋಗಿ ಇಲಾಖೆ, ಬೀದರ್.
   vii. ಶ್ರೀ ಯಶವಂತರಾವ್ ತಂದೆ ಧರ್ಮರಾವ್ ಮಾಲಿಪಾಟೀಲ್, ದ್ವಿ.ದ.ಸ. ಜಿಲ್ಲಾ ವಿಮಾಧಿಕಾರಿಗಳ ಕಛೇರಿ, ಗುಲ್ಬರ್ಗಾ.
   viii. ಶ್ರೀ ಡೊಂಗರೆ ಭೀಮರಾವ್ ತಂದೆ ನಾಮದೇವರಾವ್, ಪ್ರಾಚಾರ್ಯರು, ಸರ್ಕಾರಿ ಬಾಲಕರ ಪದವಿಪೂರ್ವ ಕಾಲೇಜ್, ಬೀದರ್.
   ix. ಶ್ರೀ ನಾಗಶೆಟ್ಟಿ ಬಿನ್ ಶಂಕ್ರೆಪ್ಪ, ಪೊಲೀಸ್ ಹೆಡ್ ಕಾನ್‌ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೀದರ್.
   x. ಶ್ರೀ ಮಾಣಿಕಪ್ಪ ಬಿನ್ ಬಂಡೆಪ್ಪ, ಪೊಲೀಸ್ ಹೆಡ್‌ಕಾನ್‌ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೀದರ್.
   xi. ಶ್ರೀ ನಾಗನಾಥ ಬಿನ್ ಬಸವರಾಜ್ ಹೊಸಾಳೆ, ಪೊಲೀಸ್ ಕಾನ್‌ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೀದರ್.
   xii. ಶ್ರೀ ಶ್ರೀಕಾಂತ ಬಿನ್ ವಿಶ್ವನಾಥ, ಪೊಲೀಸ್ ಕಾನ್‌ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೀದರ್.
   xiii. ಶ್ರೀ ಶಿವಕುಮಾರ್ ಬಿನ್ ಬಕ್ಕಪ್ಪ, ಪೊಲೀಸ್ ಕಾನ್‌ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೀದರ್.
   xiv. ಶ್ರೀ ರೇವಣಸಿದ್ದಪ್ಪ ಬಿನ್ ವೀರಪ್ಪ ಪೊಲೀಸ್ ಕಾನ್‌ಸ್ಟೇಬಲ್, ಕರ್ನಾಟಕ ಲೋಕಾಯುಕ್ತ, ಬೀದರ್.

xv. ಶ್ರೀ ಪಂಡಿತ್ ಬಿನ್ ಫಾಳೆಪ್ಪ, ಸಶಸ್ತ್ರ ಪೊಲೀಸ್ ಕಾನ್‌ಸ್ಟೇಬಲ್, ಪೊಲೀಸ್ ಉಪಾಧೀಕ್ಷಕರು, ಲೋಕಾಯುಕ್ತ, ಬೀದರ್‌ರವರ ವಾಹನ ಚಾಲಕರು.

xvi. ಶ್ರೀ ಚಂದ್ರಕಾಂತ ಬಿನ್ ದೇವಿದಾಸ್, ಸಶಸ್ತ್ರ ಪೊಲೀಸ್ ಕಾನ್‌ಸ್ಟೇಬಲ್, ಪೊಲೀಸ್ ಉಪಾಧೀಕ್ಷಕರು, ಲೋಕಾಯುಕ್ತ, ಬೀದರ್.

8. ಶ್ರೀ ಎಂ. ಮೋಯಿನಪಾಶಾ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ (ಬಾಲಕರ) ಕಾಲೇಜ್, ಬೀದರ್, ಇವರ ವಿಮಾ ಪಾಲಿಸಿ ಸಂಖ್ಯೆ:1117631ರ ಮೇಲೆ ಸಾಲ ಪಡೆಯುವ ಸಲುವಾಗಿ ಲಂಚ ಪಡೆದ ಆರೋಪಗಳ ವಿವರ.

9. ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಇವರುಗಳು ದಿನಾಂಕ:03.08.2010ರಂದು ನೀಡಿದ ಸಮಜಾಯಿಷಿ.

ತನಿಖಾಧಿಕಾರಿಗಳಾದ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೀದರ್, ಇವರು ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಇವರುಗಳ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಬೀದರ್, ಆರಕ್ಷಕ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:4/2010ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13 (1) (ಡಿ) ಸಹವಾಚ 13 (2)ರಡಿ ಮತ್ತು ಐಪಿಸಿ ಕಲಂ 120 (ಬಿ)ರಡಿ ದಾಖಲಿಸಿಕೊಂಡಿರುತ್ತಾರೆ.

ವಿಮಾದಾರರಾದ ಶ್ರೀ ಎಂ. ಮೋಯಿನಪಾಶಾ, ಉಪನ್ಯಾಸಕರು, ಸರ್ಕಾರಿ ಬಾಲಕರ ಪದವಿ ಪೂರ್ವ (ಬಾಲಕರ) ಕಾಲೇಜ್, ಬೀದರ್, ಇವರು ಹೊಂದಿದ್ದ ಪಾಲಿಸಿ ನಂ.1117631ರ ಮೇಲೆ ರೂ.50,000/– ಸಾಲ ಪಡೆಯಲು ಜಿಲ್ಲಾ ವಿಮಾಧಿಕಾರಿಗಳ ಕಛೇರಿ, ಬೀದರ್ ಇಲ್ಲಿ ಅರ್ಜಿ ಸಲ್ಲಿಸಿದ್ದು, ಅರ್ಜಿಯನ್ನು ಇತ್ಯರ್ಥಪಡಿಸಲು ಆಪಾದಿತರಾದ ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಇವರುಗಳು ರೂ.500/– ಲಂಚಕ್ಕೆ ಬೇಡಿಕೆ ಸಲ್ಲಿಸಿರುತ್ತಾರೆ. ಲಂಚವನ್ನು ಕೊಡಲು ಬಯಸದೇ ಶ್ರೀ ಎಂ. ಮೋಯಿನಪಾಶಾರವರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಿನಾಂಕ: 03.08.2010 ರಂದು ದೂರು ನೀಡಿರುತ್ತಾರೆ. ಈ ದೂರನ್ನು ಆಧರಿಸಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೀದರ್, ಇವರು ಕಾನೂನು ರೀತಿ ಪೂರ್ವಭಾವಿ ಕ್ರಮ ಕೈಗೊಂಡಿರುತ್ತಾರೆ. ಜಿಲ್ಲಾ ವಿಮಾಧಿಕಾರಿಗಳ ಕಛೇರಿ, ಬೀದರ್, ಇಲ್ಲಿ ದಿನಾಂಕ: 03.08.2010 ರಂದು ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಮತ್ತು ಶ್ರೀ ರವಿಚಂದು ರಾಠೋಡ್, ದ್ವಿ.ದ.ಸ. ಇವರುಗಳು ರೂ.500/– ಲಂಚ ಹಣವನ್ನು ನೆರಳು ಸಾಕ್ಷಿಯಾದ ಶ್ರೀ ಶಂಕರ್ ರವರ ಸಮಕ್ಷಮದಲ್ಲಿ ಫಿರ್ಯಾದಿ ಶ್ರೀ ಎಂ. ಮೋಯಿನಪಾಶರವರಿಂದ ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆ. ಪ್ರಕರಣದ ತನಿಖಾಧಿಕಾರಿಗಳು, ಶ್ರೀ ರವಿಚಂದು ರಾಠೋಡ್‌ರವರ ಶರ್ಟಿನ ಎಡಭಾಗದ ಜೇಬಿನಿಂದ 100/– ರೂ. ಮುಖಬೆಲೆಯ 5 ನೋಟುಗಳನ್ನು [2HH 107733, 2AD 580682, 9KU 371339, 2KF 923025 & 2AD 580683] ವಶಪಡಿಸಿಕೊಂಡಿರುತ್ತಾರೆ. ಆರೋಪಿಯಿಂದ ವಶಪಡಿಸಿಕೊಳ್ಳಲಾದ 100/– ಮುಖ ಬೆಲೆಯ ಒಟ್ಟು ಐದು ನೋಟುಗಳ ಕ್ರಮ ಸಂಖ್ಯೆಗಳು ಪ್ರಾಯೋಗಿಕ ಪಂಚನಾಮೆಯಲ್ಲಿ ನಮೂದಿಸಿದ ನೋಟುಗಳ ಕ್ರಮ ಸಂಖ್ಯೆಗಳಿಗೆ ತಾಳೆಯಾಗಿದೆ. ಶ್ರೀ ರವಿಚಂದು ರಾಠೋಡ್‌ರವರ ಕೈಗಳನ್ನು, ಷರ್ಟು ಜೇಬುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆಸಿದಾಗ ದ್ರಾವಣ ತಿಳಿ ಗುಲಾಬಿ ಬಣ್ಣಕ್ಕೆ ತಿರುಗಿದೆ. ಈ ಪರೀಕ್ಷೆಗಳು ರಾಸಾಯನಿಕ ಪರೀಕ್ಷಕರು ದಿನಾಂಕ:21–8–2010ರಂದು ನೀಡಿರುವ ಪರೀಕ್ಷಣಾ ವರದಿಯಲ್ಲಿಯೂ ದೃಢಪಟ್ಟಿದೆ. ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್ ವಿರುದ್ಧ ಎಫ್‌ಐಆರ್‌ನಲ್ಲಿ ದೂರು ದಾಖಲಿಸಿರುವ ಅಂಶ, ವಾಯ್ಸ್ ರೆಕಾರ್ಡ್‌ನಲ್ಲಿ ಲಂಚದ ಹಣಕ್ಕೆ ಬೇಡಿಕೆ ಸಲ್ಲಿಸಿರುವುದು ದಾಖಲಾಗಿರುವ ಅಂಶ, ಲಂಚದ ಹಣವನ್ನು ಅಧೀನ ಸಿಬ್ಬಂದಿಯಾದ ಶ್ರೀ ರಾಠೋಡ್ ರವರಿಗೆ ಕೊಡಿಸಿರುವ ಅಂಶಗಳು ಮತ್ತು ನೆರಳುಸಾಕ್ಷಿಯಾದ ಶ್ರೀ ಶಂಕರ್‌ರವರ ಹೇಳಿಕೆಗಳಿಂದ ಆರೋಪಿತರ ವಿರುದ್ಧ ಭ್ರಷ್ಟಾಚಾರ ನಿರೋಧ ಅಧಿನಿಯಮ 1988ರ ಕಲಂ 7, 13 (1)(ಡಿ) ಸಹವಾಚ 13 (2)ರಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವ ಆರೋಪವು ಮೇಲ್ನೋಟಕ್ಕೆ ದೃಢಪಟ್ಟಂತಾಗಿರುವುದರಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸುವುದು ಸೂಕ್ತವೆಂದು ಸರ್ಕಾರ ಮನಗಂಡಿದೆ.

ಸರ್ಕಾರವು ಸಹಾಯಕ ನಿರ್ದೇಶಕರು/ಜಿಲ್ಲಾ ವಿಮಾಧಿಕಾರಿಗಳನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರಿ ಹೊಂದಿದೆ. ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಇವರು ಸೇವೆಯಲ್ಲಿದ್ದಾಗ ಭ್ರಷ್ಟಾಚಾರ ನಿರೋಧ ಅಧಿನಿಯಮ 1988ರ ಕಲಂ 7, 13 (1)(ಡಿ) ಸಹವಾಚ 13 (2)ರಡಿ ಮತ್ತು ಐಪಿಸಿ ಕಲಂ 120 (ಬಿ)ರಡಿ ಎಸಗಿರುವ ಅಪರಾಧದ ಆರೋಪಕ್ಕಾಗಿ ಸದರಿ ಕಾಯ್ದೆಯ ಕಲಂ 19 (1)(ಬಿ)ರಡಿ ಅಭಿಯೋಜನೆಗೆ ಒಳಪಡಿಸಲು ಸಾಕಷ್ಟು ಆಧಾರಗಳು ಕಂಡುಬಂದಿರುವುದರಿಂದ ಸರ್ಕಾರ ಈ ಮುಂದಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 41 ಕವಿಇ 2010, ಬೆಂಗಳೂರು, ದಿನಾಂಕ: 16.05.2012**

ಭ್ರಷ್ಟಾಚಾರ ನಿರೋಧ ಅಧಿನಿಯಮ, 1988ರ ಕಲಂ 19 (1)(ಬಿ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಚಿಕ್ಕಮಗಳೂರು, ಇವರನ್ನು ಸದರಿ ಕಾಯ್ದೆಯ ಕಲಂ 7, 13 (1)(ಡಿ) ಸಹವಾಚ 13 (2)ರ ಅಡಿ ಮತ್ತು ಐಪಿಸಿ ಕಲಂ 120 (ಬಿ)ರಡಿಯಲ್ಲಿ ಎಸಗಿದ ಅಪರಾಧದ ಆರೋಪಕ್ಕೆ ಸದರಿ ಕಾಯ್ದೆಯ ಕಲಂ 19 (1)(ಬಿ)ರಡಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರ ಈ ಮೂಲಕ ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 19(1) ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ:16.05.2012 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಲ್. ರಮೇಶ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಪಿ.ಆರ್. 1498**

## URBAN DEVELOPMENT SECRETARIAT

**Sub:** Formation of Unified Metropolitan Transport for Mysore to facilitate Implementation of Urban Transport Programmes and Projects and Integrated Urban Transport System- reg

**READ:**
1. G O No UDD 134 BMR 2006 (1), date 8-3-2007
2. D.O Letter No.K 14011/48/206-UT (PT), dated. 12-1-2009 from Ministry of Urban Development, NewDelhi.
3. G O No. UDD 191 BMR 2010, Bangalore dated 09-07- 2010
4. Corrigendum dated 06-08-2010

**PREAMBLE:**

In the letter dated 12-1-2009, the Government of India has stated that Urban Areas, which are emerging as powerful engines of growth, are solely in need of a transport system that facilitates easy flow of goods and services and human mobility to support specified systems can attract investment, trigger, economic growth, create jobs and reduce pollution. Therefore, National Urban Transport Policy (NUTP) has been drafted to ensure safe, affordable, quick, comfortable, reliable and sustainable access for the growing number of city residents to jobs, education, recreation and such other needs within our cities. National Urban Transport Policy (NUTP) stipulates designation of nodal department in the State Government for Urban Transport. Hence, Directorate of Urban Land Transport has been created and National Urban Transport Policy (NUTP) also recommends setting up of Unified Urban Transport Authorities (UMTA's) in million plus cities. Unified Metropolitan Transport Authorities (UMTA's) are required to facilitate more coordinated planning and implementation of Urban Transport programmes and projects and integrated management of urban transport systems.

Mysore being the second largest city in Karnataka and a major tourist centre, is one of the two cities selected for JNNURM funding in Karnataka. As per 2001 census population of Mysore city was 7,87,179. In Mysore with decadal urban population growth for 1991-2001 being 29.74%. Migration of people from rural area being a continuous trend. Mysore population is projected at 10,23,332 for the year 2010 considering a decadal population growth of 30% for 2001-2011. As Mysore is emerging as a million plus city, the State Government vide GO noted at ref (3) and modified vide corrigendum at ref (4). Unified Urban Transport Authority for the city of Mysore called as **"Mysore City Urban Land Transport Authority"** to function as an umbrella organization to coordinate planning and implementation of Urban Transport Programme Projects and provide an integrated management structure. All land transport system (excluding railways) in the Mysore Local Planning Area have been brought under the purview of Mysore City Land Transport Authority. In light of the fact that DULT is the nodal agency for the subject of Urban Transport, it has been deemed necessary to reconstitute the Mysore City Land Transport Authority. Hence the order.

**GOVERNMENT ORDER NO.DULT 248 ADM 2012, BANGALORE DATED 26-05-2012**

Under the circumstances explained above, Government is pleased to reconstitute the Mysore City Land Transport Authority with the members noted below:

1. Commissioner & E/o Principal Secretary to Government, Urban Land Transport, Urban Development Department - Chairman

| | | |
|---|---|---|
| 2. | Secretary, Urban Development Department or his representative | - Vice Chairman |
| 3. | Deputy Commissioner, Mysore | - Member Secretary |
| 4. | Chief Executive officer, Zilla Panchayat, Mysore | - Member |
| 5. | Commissioner of Police, Mysore | - Member |
| 6. | Commissioner, Mysore Urban Development Authority | - Member |
| 7. | Commissioner, Mysore City Corporation | - Member |
| 8. | Joint Director, Town Planning, Mysore | - Member |
| 9. | Superintendent Engineer, PWD, Mysore | - Member |
| 10. | Deputy Commissioner of Transport, Mysore | - Member |
| 11. | Regional Operation Manager, SWR, Mysore | - Member |
| 12. | Divisional Officer, Dept of Forest, Ecology and Environment | - Member |
| 13. | Divisional Officer, Karnataka State Pollution Control Board | - Member |
| 14. | Representative, KUIDFC, Bangalore | - Member |
| 15. | Divisional Controller, KRDCL, Mysore | - Member |
| 16. | Divisional Engineer, KSRTC Urban/city division, Mysore | - Member |
| 17. | Two identified expert in Transport Management | - Member |

The functions of Mysore City Land Transport Authority shall be as follows:

1. To co-ordinate all land transport matters in the Mysore Local Planning Area.
2. To prepare master plan for transport infrastructure based on the Comprehensive Traffic and Transportation study for Mysore.
3. To oversee implementation of CTTP and all transportation projects.
4. To appraise and recommend transportation and infrastructure projects related to assistance.
5. To function as empowered committee for all urban transportation projects related to Mysore Local Planning Area.
6. To initiate action for a regulatory framework for all land transport systems in Mysore Local Planning Area.
7. To initiate measure to implement common ticketing system wherever possible.
8. To take any other decision for integration of urban transport, land use planning and implementation of projects.
9. All Urban Transport related projects like road widening, flyovers, underpasses etc., need to be cleared by MCLTA before they are taken up for implementation.
10. KUIDFC release funds only to these transport related projects approved by MCLTA.
11. Any other functions entrusted by State and Central Government from time to time.

By order and in the name of the Governor of Karnataka

Commissioner
Directorate of Urban Land Transport
& E/o Principal Secretary to Government
Urban Development Department

**PR - 1532**

